# ಪಂಚಮ

ಸಂಪುಟ : 3  ಸಂಚಿಕೆ : 15  5, ಸೆಪ್ಟೆಂಬರ್ 1979  ಪಾಕ್ಷಿಕ ಬೆಲೆ : 20 ಪೈಸೆ

ಎಲ್ಲ ಬಗೆಯ ಆರ್ಥಿಕ, ಧಾರ್ಮಿಕ ಸಾಮಾಜಿಕ, ಬೌದ್ಧಿಕ ದಬ್ಬಾಳಿಕೆಯ ವಿರುದ್ಧ ದಲಿತರಲ್ಲಿ ಪ್ರಜ್ಞೆ ಮೂಡಿಸಲು ಯತ್ನಿಸುತ್ತಿರುವ ಪಂಚಮಕ್ಕೆ ಚಂದಾದಾರರಾಗಿರಿ.

ವಾರ್ಷಿಕ ಚಂದಾ 5 ರೂ. ಗಳು.

ಲೇಖನ—ಸುದ್ದಿ ಕಳುಹಿಸುವ ಮೂಲಕ ನೋವುಳ್ಳವರ ನುಡಿಯಾಗಿರುವ ಪಂಚಮವನ್ನು ನಿಮ್ಮ ದನಿಯನ್ನಾಗಿಸಿಕೊಳ್ಳಿ.

## ಬಾಗೇಪಲ್ಲಿ : ದಲಿತನೊಬ್ಬನ ಕೊಲೆ

[ವರದಿ: ಪಂಚಮ ಪ್ರತಿನಿಧಿಯಿಂದ]

ಕೋಲಾರ ಜಿಲ್ಲಾದ್ಯಂತ ರೆಡ್ಡಿ ಜನರು ದಲಿತರನ್ನು ಬಗ್ಗು ಬಡಿಯುವ ಅಮಾನುಷ ಕಾರ್ಯವನ್ನು ಅನೇಕ ವರ್ಷಗಳಿಂದ ನಿರಂತರವಾಗಿ ಮುಂದುವರಿಸಿಕೊಂಡು ಬರುತ್ತಿದ್ದಾರೆ. ತಮಗಾಗುವ ಅನ್ಯಾಯಗಳ ವಿರುದ್ಧ ಸೊಲ್ಲೆತ್ತಿದರೆ ದಲಿತರ ಕೊಲೆ ಸುಲಿಗೆಗಳು. ಉಳ್ಳವರ ಹಿತಕಾಯುವ ಅಧಿಕಾರಿಗಳು ಸಹ ದಲಿತರ ಯಾವುದೇ ಕೊಲೆ ಪ್ರಕರಣಗಳನ್ನು ನಿಷ್ಪಕ್ಷಪಾತವಾಗಿ ದಾಖಲು ಮಾಡಿಕೊಂಡು ರಕ್ಷಣೆ ನೀಡುವಲ್ಲಿ ಪಕ್ಷಪಾತ ತೋರುತ್ತಿದ್ದಾರೆ. ಅವರೆಲ್ಲ ಸವರ್ಣೀಯರ ಪ್ರಭಾವ ಮತ್ತು ಹಣದ ಆಮಿಷಕ್ಕೆ ಒಳಗಾಗಿ ದಲಿತ ವಿರೋಧಿ ನಿಲುವು ತಾಳಿದ್ದಾರೆ ಎಂಬುದಕ್ಕೆ ಇತ್ತೀಚೆಗೆ ಅನೇಕ ಪ್ರಕರಣಗಳು ಇದ್ದರು ಕಳೆದ ತಿಂಗಳು ಬಾಗೇಪಲ್ಲಿ ತಾಲ್ಲೂಕಿನಲ್ಲಿ ನಡೆದ ದಲಿತನೊಬ್ಬನ ಕೊಲೆ ಒಂದು ಅಮಾನುಷ ಘಟನೆ.

ಬಾಗೇಪಲ್ಲಿ ತಾಲ್ಲೂಕು ಗೌನೋರಹಳ್ಳಿಗೆ ಸಮಾರು 50 ಮೀಟರ್ ದೂರದಲ್ಲಿ ಕೆಂಡೆ ನಾರಾಯಣಪ್ಪ ಎಂಬ ಜಮೀನ್ದಾರಿಯ ಜೋಳದ ಹೊಲವಿದೆ.

[2ನೇ ಪುಟ ನೋಡಿ]

## ದ·ಸಂ·ಸ· ದಿಂದ ರಾಜ್ಯಾದ್ಯಂತ 'ಕರಾಳದಿನ' ಆಚರಣೆ

ದೇಶದ ಉದ್ದಗಲಕ್ಕೂ ದಲಿತರ ಮೇಲೆ ಸಾಮಾಜಿಕ-ಆರ್ಥಿಕ ದಬ್ಬಾಳಿಕೆ ನಿರಂತರವಾಗಿ ನಡೆಯುತ್ತಿದೆ. ದಲಿತರ ಕೊಲೆ ಸುಲಿಗೆಗಳು ನಡೆಯದ ದಿನಗಳೇ ಇಲ್ಲ. ಇಂತಹ ದಬ್ಬಾಳಿಕೆಯನ್ನು ತಡೆಗಟ್ಟದ, ದಲಿತರ ಹಕ್ಕುಗಳನ್ನು ರಕ್ಷಣೆ ಮಾಡದ, ಎಲ್ಲಾ ಜನತೆಗೆ ಸಮಾನತೆಯ ಆಧಾರದ ಮೇಲೆ ಅನ್ನ, ವಸತಿ, ವಿದ್ಯೆ, ಉದ್ಯೋಗ ಕೊಡದ ಈ ದೇಶದ ಸ್ವಾತಂತ್ರ್ಯಕ್ಕೆ ಏನು ಅರ್ಥವಿದೆ? ಆದ್ದರಿಂದ ಆಗಸ್ಟ್ 15ರ 'ಸ್ವಾತಂತ್ರ್ಯದಿನ'ವನ್ನು 'ಕರಾಳದಿನ'ವೆಂದು ಆಚರಿಸಲು ರಾಜ್ಯ ದಲಿತ ಸಂಘರ್ಷ ಸಮಿತಿ ಮತ್ತು ಬಂಡಾಯ ಸಾಹಿತ್ಯ ಸಂಘಟನಾ ಸಮಿತಿಯು ಜಂಟಿಯಾಗಿ ತಮ್ಮ ಶಾಖೆಗಳಿಗೆ ಕರೆ ನೀಡಿದ್ದವು. ಅಂತೆಯೇ ರಾಜ್ಯಾದ್ಯಂತ 'ಕರಾಳ ದಿನ' ಆಚರಿಸಿದ ವರದಿಗಳು ಬಂದಿವೆ.

### ಬೆಂಗಳೂರಿನಲ್ಲಿ

ರಾಜ್ಯ ದಲಿತ ಸಂಘರ್ಷ ಸಮಿತಿ ಮತ್ತು ಬಂಡಾಯ ಸಾಹಿತ್ಯ ಸಂಘಟನಾ ಸಮಿತಿ ಆಶ್ರಯದಲ್ಲಿ ಆಗಸ್ಟ್ 15 ರಂದು 'ಕರಾಳ ದಿನ' ಆಚರಿಸಲಾಯಿತು; ಡಾ॥ ಜಿ. ರಾಮಕೃಷ್ಣ, ಎನ್. ಎಲ್. ಉಪಾಧ್ಯಾಯ, ಎಚ್. ಎಂ. ಚನ್ನಯ್ಯ, ಇಂದೂಧರ ಹೊನ್ನಾಪುರ ಅವರು 'ಸ್ವಾತಂತ್ರ್ಯ ದಿನ' ಮತ್ತು 'ಕರಾಳದಿನ' ಆಚರಣೆ ಕುರಿತು ಮಾತನಾಡಿದರು. ಶ್ರೀಮತಿ ವಿಜಯಾ ಅವರು ಬಂಡಾಯ ಕೃತಿಗಳಾದ ಸಿದ್ದಲಿಂಗಯ್ಯ ಅವರ 'ಸಾವಿರಾರು ನದಿಗಳು', ಬಂಡಾಯ ಸ್ಮರಣ ಸಂಚಿಕೆ ಮತ್ತು ಬರಗೂರು ರಾಮಚಂದ್ರಪ್ಪ ಅವರ 'ಕನ್ನಡ ಹೋರಾಟ'ವನ್ನು ಬಿಡುಗಡೆಮಾಡಿದರು. ಕೊನೆಯಲ್ಲಿ 'ಸಮುದಾಯ' ನಾಟಕ ತಂಡ 'ಬೆಲ್ಚಿ' ನಾಟಕ ಪ್ರದರ್ಶಿಸಿತು.



ಕೋಲಾರ ಜಿಲ್ಲಾ ದಲಿತ ಸಂಘರ್ಷ ಸಮಿತಿ ಆಶ್ರಯದಲ್ಲಿ ಆಗಸ್ಟ್ 15 ರಂದು ಜಿಲ್ಲೆಯ ಎಲ್ಲಾ ತಾಲ್ಲೂಕು ಶಾಖೆಗಳು ತಮ್ಮ ಬ್ಯಾನರ್‌ಗಳಸಹಿತ ಕೋಲಾರಕ್ಕೆ ಬಂದು 'ಕರಾಳ ದಿನ' ಆಚರಣೆಯ ಪ್ರದರ್ಶನದಲ್ಲಿ ಪಾಲ್ಗೊಂಡಿದ್ದವು.

# ತುಮಕೂರು ಬಳಿ ದಲಿತ ಕುಟುಂಬದ ಮೂವರ ಕೊಲೆ

[ವರದಿ: ಪಂಚಮ ಪ್ರತಿನಿಧಿಯಿಂದ]

ತುಮಕೂರು ತಾಲ್ಲೂಕು ಮಾರನಾಯಕನ ಪಾಳ್ಯದಲ್ಲಿ ದಲಿತವರ್ಗದ ಹನುಮಂತಯ್ಯ (45), ಮತ್ತು ಸಿದ್ಧಗಂಗಮ್ಮ (12), ಮತ್ತು ಹನುಮಕ್ಕ (10) ಎಂಬ ಆತನ ಹೆಣ್ಣು ಮಕ್ಕಳನ್ನು ಆಗಸ್ಟ 8 ರಂದು ಅದೇ ಊರಿನ ಲಿಂಗಾಯಿತ ಜಾತಿಯ ನಂಜುಂಡಯ್ಯ ಮತ್ತು ದೇವರಾಯಪಟ್ಟದ ಭೇರ್ಮನ್ ಚನ್ನಮಲ್ಲೇಗೌಡ ಎಂಬುವವರು ಒಟ್ಟುಗೂಡಿ ಕೊಲೆ ಮಾಡಿಸಿದ್ದಾರೆಂದು ವರದಿಯಾಗಿದೆ.

ಮೊದಲ ಆರೋಪಿ ನಂಜುಂಡಯ್ಯ ಹನುಮಂತಯ್ಯನ ಒಂದುವರೆ ಎಕರೆಜಮೀನುಲಪಟಾಯಿಸಲು ಆ ಸಂಬಂಧದಲ್ಲಿ ಉಂಟಾಗಿದ್ದ ವಿವಾದದ ಹಿನ್ನೆಲೆಯಲ್ಲಿ ಕೊಲೆಗೀಡಾದ ಹನುಮಂತಯ್ಯನ ಮನೆ ಮೇಲೆ ಈ ಒಂದು ವರ್ಷದ ಹಿಂದೆ ದಾಳಿ-ದೌರ್ಜನ್ಯ ನಡೆಸಿದ್ದ. ನಂಜುಂಡಯ್ಯನ ಬೆಂಬಲಿಗರಾಗಿ ಅದೇ ಊರಿನ ಪುಟ್ಟೀರಯ, ಚಂದ್ರಯ್ಯ, ತಿಮ್ಮಯ್ಯ, ಬಸವರಾಜಪ್ಪ, ಈರಣ್ಣ ಮುಂತಾದವರು ಹನುಮಂತಯ್ಯನ ಮೇಲೆ ಆಗ ದೌಜನ್ಯ ನಡೆಸಿ "ಒಂದಲ್ಲ ಒಂದು ದಿನ ನಿನ್ನನ್ನು ಬಲಿ ತೆಗೆದುಕೊಳ್ಳುತ್ತೇವೆ" ಎಂದು ಬೆದರಿಸಿ ಪ್ರತಿಜ್ಞೆ ಮಾಡಿದ್ದರಂತೆ.

ಜಮೀನಿಗೆ ಸಂಬಂಧಿಸಿದಂತೆ ಉದ್ಭವಿಸಿದ ಈ ಜಿದ್ದಿನಿಂದ ನಂಜುಂಡಯ್ಯನು ದೇವರಾಯಪಟ್ಟದ ಛೇರ್ಮನ್ ನೆರವಿನೊಡನೆ ತನ್ನ ಕುಖ್ಯಾತ ಕೊಲೆಗಡುಕ ಬೆಂಬಲಿಗರ ಜತೆ ಇತ್ತೀಚೆಗೆ ಆತನ ಮನೆಗೆ ನುಗ್ಗಿ ತಮ್ಮ ತಂದೆ ಮತ್ತು ಸೋದರಿಯರಿಬ್ಬರನ್ನು ಮಚ್ಚಿನಿಂದ ಅಮಾನವೀಯವಾಗಿ ಕತ್ತರಿಸಿ ಕೊಂದರೆಂದು ಹನುಮಂತಯ್ಯನ ಮಗ ಈಶ್ವರಪ್ಪ ತಮ್ಮ ದುಃಖತೋಡಿಕೊಂಡಿದ್ದಾರೆ.

ಆದರೆ ಕೊಲೆ ಪ್ರಕರಣ ಪ್ರಮುಖ ದಿನ ಪತ್ರಿಕೆಗಳಲ್ಲಿ ತಪ್ಪಾಗಿ ಪ್ರಕಟವಾಗಿದೆ ಎಂದು ತಿಳಿದು ಬಂದಿದೆ.

ಪ್ರಕರಣವನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಆಗಸ್ಟ 10 ರಂದು ದಲಿತ ಸಂಘರ್ಷ ಸಮಿತಿಯು ಮೆರವಣಿಗೆ ನಡೆಸಿ ಈ ಅಮಾನವೀಯ ಕೊಲೆ ಪ್ರಕರಣವನ್ನು ಖಂಡಿಸಿತು.

## ಬಾಗೇಪಲ್ಲಿ ಬಳಿ ದಲಿತನ ಕೊಲೆ

[ಮೊದಲನೆ ಪುಟದಿಂದ]

ಆ ಹೊಲದಲ್ಲಿ ಬಾವಿಯೊಂದಿದ್ದು ಅದೊಂದು ಹತ್ಯೆಯ ಕೇಂದ್ರವಾಗಿದೆ.

ಗೌನೋರಹಳ್ಳಿ ಬಳಿಯ ಮಿಂಡಂಪಲ್ಲಿಯ ಚಿಕ್ಕವೀರಪ್ಪ ಎಂಬ ದಲಿತ ಯುವಕ, ಜುಲೈ 4ರಂದು ಕೂಲಿಗೆ ಹೋಗಿ ಸಂಜೆ ಮನೆಗೆ ವಾಪಸ್ಸಾಗುವಾಗ ಸೀಮೆಎಣ್ಣೆ ಮತ್ತಿತರ ಸಾಮಾನುಗಳನ್ನು ಕೊಂಡು ತರುತ್ತಿದ್ದ. ಕೆಂಡನಾರಾಯಣಪ್ಪ, ನರಸಿಂಹಪ್ಪ ಮತ್ತು ವೆಂಕಟರಮಣಪ್ಪ ಎಂಬುವವರು ತಮ್ಮ ಮನೆಗೆ ಎಳೆದೊಯ್ದರು. ರಾತ್ರಿ ಅವರ ಮನೆಯಲ್ಲೆ ಆತನಿಗೆ ಊಟವನ್ನು ಕೊಟ್ಟನಂತರ ಅಂದು ರಾತ್ರಿಯೇ ಮೇಲೆ ತಿಳಿಸಿದ ಆ ಮೂವರು ಜೋಳದ ಹೊಲದಲ್ಲಿ ಅಮಾನುಷವಾಗಿ ಹೊಡೆದು, ಮುಖದ ಗುರುತು ಸಹ ಸಿಗದ ರೀತಿಯಲ್ಲಿ ಕಲ್ಲಿನಲ್ಲಿ ಜಜ್ಜಿ ಬಾವಿಗೆ ಎಸೆದರೆಂದು ಹೇಳಲಾಗಿದೆ.

ಚಿಕ್ಕವೀರಪ್ಪನ ಕೊಲೆ ಸುದ್ದಿ ಊರಿನ ಸುತ್ತಲ್ಲ ದಟ್ಟವಾಗಿ ಹಬ್ಬಿತು. ಬಾವಿಗೆ ಎಸೆಯಲಾಗಿದ್ದ ಚಿಕ್ಕವೀರಪ್ಪನ ಶವವನ್ನು ಆತನ ಅಣ್ಣ ಈರಪ್ಪ ಹೊರತೆಗೆದ. ಶವವನ್ನು ಹೊರತೆಗೆದಾಗ ಮೃತನ ಬಾಯಿ ಮತ್ತಿತರ ಶರೀರದ ಭಾಗಗಳಲ್ಲಿ ರಕ್ತ ಸ್ರಾವದ ಕಲೆಗಳಿದ್ದವು. ಆತನ ಮೈಮೇಲೆಲ್ಲ ಬಾಸುಂಡೆ ಗೆರೆಗಳು ಇದ್ದವೆಂದು ಹಾಗೂ ಮುಖವನ್ನೆಲ್ಲ ಜಜ್ಜಲಾಗಿತ್ತೆಂದು ಈರಪ್ಪ ತಿಳಿಸಿದ್ದಾನೆ,

○ ○

ಕೋಲಾರ ಜಿಲ್ಲೆಯಲ್ಲಿ ನಿರಂತರವಾಗಿ ದಲಿತರ ಕೊಲೆ ನಡೆಯುತ್ತಿದ್ದು ಈ ಬಗ್ಗೆ ದಲಿತರಿಗೆ ಸೂಕ್ತ ರಕ್ಷಣೆ ನೀಡಬೇಕೆಂದು ಮತ್ತು ಈ ಕೊಲೆ ಪ್ರಕರಣದ ತಪ್ಪಿತಸ್ಥರಿಗೆ ತಕ್ಕ ಶಿಕ್ಷೆ ವಿಧಿಸಬೇಕೆಂದು ಜಿಲ್ಲಾ ದಲಿತ ಸಂಘರ್ಷ ಸಂಘರ್ಷ ಸಮಿತಿ ಸರ್ಕಾರವನ್ನು ಒತ್ತಾಯಪಡಿಸಿದೆ.

## ದಲಿತ ನುಡಿ

ಹೊಲೆ ಮಾದಿಗರಲ್ಲಿರುವ ಅಸ್ಪೃಶ್ಯತೆ ಮೊದಲು ತೊಲಗಿ, ಎರಡೂ ಜಾತಿಗಳು ಐಕ್ಯವಾದ ಕೂಡಲೇ ಇಡೀ ಅಸ್ಪೃಶ್ಯತೆಯೇ ತೊಲಗಿ ಹೋಗುತ್ತದೆ. ಅಸ್ಪೃಶ್ಯತೆ ತೊಲಗಿದರೆ ಜಾತಿ ವ್ಯವಸ್ಥೆಯೂ ಅಲುಗಾಡುತ್ತದೆ. ಸೋಷಲಿಸ್ಟ ತತ್ವದ ಗ್ರಾಮ ಪುನರ್ನಿರ್ಮಾಣ ಸಾಧ್ಯವಾಗುತ್ತದೆ.

—ಬೋಯಿ ಭೀಮನ್ನ

---

## ಹಿಂದುಳಿದ ವರ್ಗದ ಕುಟುಂಬದ ಮೇಲೆ ಹಲ್ಲೆ

ಬೆಳಗಾವಿ ಜಿಲ್ಲೆ ಬೈಲಹೊಂಗಲ ತಾಲ್ಲೂಕು ಹೊಳೆಹೊಸೂರು ಗ್ರಾಮದ ನಾಗವ್ವಾ ಧೂಳಪ್ಪ ಹಡಪದ ಮತ್ತು ಸಿದ್ಧವ್ವಾ ದೂಳಪ್ಪ ಹಡಪದ ಅವರ ಮೇಲೆ ಅದೇ ಗ್ರಾಮದ ಕೆಲವು ಮಂದಿ ಭೂಮಾಲೀಕರು 1976ರಿಂದಲೂ ಸತತವಾಗಿ ಹಲ್ಲೆ ನಡೆಸುತ್ತಿದ್ದಾರೆಂದು ತಿಳಿದು ಬಂದಿದೆ.

ಈ ಬಗ್ಗೆ ಧಾರವಾಡದ ರಾಚಪ್ಪಾ ಧೂಳಪ್ಪಾ ಹಡಪದ ಅವರು ಬೆಳಗಾವಿ ಡಿ.ಐ.ಜಿ. ಅವರಿಗೆ ಲಿಖಿತ ದೂರೊಂದನ್ನು ನೀಡಿದ್ದು ಪೋಲೀಸರು ಯಾವುದೇ ಕ್ರಮ ಕೈಗೊಂಡಿಲ್ಲವೆನ್ನಲಾಗಿದೆ.

ನಾಗವ್ವನ ಬಳಿ ಇರುವ ನಾಲ್ಕು ಎಕರೆ ಜಮೀನನ್ನು ಕಬಳಿಸಲು ಭೂ ಮಾಲೀಕರು ಸಂಚು ಹೂಡಿದ್ದು ಅದು ಈಡೇರದ ಕಾರಣ ದೌರ್ಜನ್ಯ ನಡೆಸುತ್ತಿದ್ದಾರೆಂದು ರಾಚಪ್ಪ ಅವರು ದೂರಿದ್ದಾರೆ.

ಭೂಮಾಲೀಕರೊಂದಿಗೆ ಪೊಲೀಸರು ಶಾಮೀಲಾಗಿ ಬಡವರ ಮೇಲೆ ಅವ್ಯಾಹತವಾಗಿ ದೌರ್ಜನ್ಯ ನಡೆಸುತ್ತಿದ್ದಾರೆಂದು ತಿಳಿಸಿರುವ ಅವರು ಹಲ್ಲೆ ನಡೆದಾಗೆಲ್ಲ ಪೊಲೀಸರಿಗೆ ದೂರು ನೀಡಿದ್ದರೂ ಆರೋಪಿಗಳ ಮೇಲೆ ಯಾವುದೇ ಕ್ರಮ ಕೈಗೊಂಡಿಲ್ಲ ಎಂದು ಆರೋಪಿಸಿದ್ದಾರೆ.

ಆರೋಪಿಗಳ ವಿರುದ್ಧ ಕೂಡಲೇ ಕ್ರಮಕೈಗೊಂಡು ನ್ಯಾಯ ದೊರಕಿಸಿ ಕೊಡದಿದ್ದರೆ ದಲಿತ ಸಂಘರ್ಷ ಸಮಿತಿ ನೇತೃತ್ವದಲ್ಲಿ ಉಪವಾಸ ಸತ್ಯಾಗ್ರಹ ಆರಂಭಿಸುವುದಾಗಿ ರಾಚಪ್ಪ ಸ್ಪಷ್ಟಪಡಿಸಿದ್ದಾರೆ.

# ದ. ಸಂ. ಸ. ಮತ್ತು ಮಿತ್ರ ಸಂಘಟನೆಗಳ ಪ್ರದರ್ಶನ

ವರದಿ : ದೇ. ಮಹದೇವಯ್ಯ

ರಾಜ್ಯ ದಲಿತ ಸಂಘರ್ಷ ಸಮಿತಿ ಮತ್ತು ಬಂಡಾಯ ಸಾಹಿತ್ಯ ಸಂಘಟನಾ ಸಮಿತಿಯು ನೀಡಿದ ಕರೆ ಅನುಸರಿಸಿ ಮಳವಳ್ಳಿ ದಲಿತ ವಿದ್ಯಾರ್ಥಿ ಕೂಟವು ಆಗಸ್ಟ್ 15ರ ಸ್ವಾತಂತ್ರ್ಯ ದಿನಾಚರಣೆಯನ್ನು ಬಹಿಷ್ಕರಿಸಿ ಕರಾಳದಿನವನ್ನಾಗಿ ಆಚರಿಸಿತು.

ಕಪ್ಪುಬಾವುಟ ಮತ್ತು ಶೋಷಣೆಯ ವಿರುದ್ಧದ ಘೋಷಣೆಯ ಭಿತ್ತಿಪತ್ರಗಳನ್ನು ಹಿಡಿದ ನೂರಾರು ಮಂದಿ ವಿದ್ಯಾರ್ಥಿಗಳು, ಯುವಕರು ಊರಿನ ಪ್ರಮುಖ ಕೇಂದ್ರಗಳಾದ ಕೋಟೆ—ಪೇಟೆ ಮತ್ತು ದಲಿತರ ಕೇರಿಗಳಲ್ಲಿ ಪ್ರತಿಭಟನಾ ಪ್ರದರ್ಶನ ನಡೆಸಿದರು. ಇಂತಹ ಪ್ರದರ್ಶನ ದಲಿತರಿಂದ ಇಲ್ಲಿ ನಡೆದಿರುವುದು ಇದೇ ಮೊದಲನೆಯದು.

ಪ್ರದರ್ಶನಕಾರರು ಕೊನೆಯಲ್ಲಿ ತಾಲ್ಲೂಕು ಕಚೇರಿಗೆ ತೆರಳಿ ದಲಿತರ ಮೇಲಿನ ದೌರ್ಜನ್ಯ ಮತ್ತು ಅವರಿಗೆ ಆಗುತ್ತಿರುವ ಶೋಷಣೆ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳಬೇಕೆಂದು ಮತ್ತು ದಲಿತರ ಸಮಸ್ಯೆ ಕುರಿತ ಇತರೆ ಬೇಡಿಕೆಗಳ ಮನವಿಯೊಂದನ್ನು ಸಲ್ಲಿಸಿದರು.

ದಲಿತ ಸಂಘರ್ಷ ಸಮಿತಿಯ ಘೋಷಣೆಗಳನ್ನು ಊರಿನ ಎಲ್ಲಾ ಪ್ರಮುಖ ಸ್ಥಳಗಳ ಗೋಡೆಗಳ ಮೇಲೆ ಬರೆಯಲಾಗಿದೆ.

## ಕೊಳ್ಳೇಗಾಲದಲ್ಲಿ ಕಪ್ಪುಬಾವುಟಕ್ಕೆ ಸೆಲ್ಯೂಟ್ ಸ್ವೀಕಾರ

ರಾಜ್ಯದಲಿತ ಸಂಘರ್ಷ ಸಮಿತಿ ತನ್ನ ಎಲ್ಲಾ ಶಾಖೆಗಳಿಗೆ ಮತ್ತು ಸೋದರ ಸಂಘಟನೆಗಳಿಗೆ ನೀಡಿದ ಕರೆಯನ್ನು ಮನ್ನಿಸಿ ಕೊಳ್ಳೇಗಾಲದ ಡಾ॥ ಬಿ.ಆರ್. ಅಂಬೇಡ್ಕರ್ ಸಂಘದ ನೇತೃತ್ವದಲ್ಲಿ ಆಗಸ್ಟ್ 15ರ ಸ್ವಾತಂತ್ರ್ಯೋತ್ಸವನ್ನು 'ಕಪ್ಪುದಿನ' ವನ್ನಾಗಿ ಆಚರಿಸಲಾಯಿತು.

ಸಹಸ್ರಾರು ಸಂಖ್ಯೆಯಲ್ಲಿ ದಲಿತ ವಿದ್ಯಾರ್ಥಿಗಳು, ಯುವಕರು, ರೈತರು, ಕೂಲಿಕಾರ್ಮಿಕರು ಮತ್ತು ಮಹಿಳೆಯರು ಸೇರಿದ್ದ ಸಭೆಯಲ್ಲಿ ರೈತ ಮುಖಂಡ ಪಿ. ಮಲ್ಲೇಶ್ ಅವರು ಕಪ್ಪುಧ್ವಜಾರೋಹಣ ಮಾಡಿ ಸೆಲ್ಯೂಟ್ ಸ್ವೀಕರಿಸಿದರು.



ಮಳವಳ್ಳಿ ದಲಿತ ವಿದ್ಯಾರ್ಥಿಕೂಟದ ಕಾರ್ಯಕರ್ತರು ಪ್ರದರ್ಶನ ನಡೆಸಿದ ನಂತರ ತಾಲ್ಲೂಕು ಕಚೇರಿಗೆ ತೆರಳಿ ತಹಸಿಲ್ದಾರರಿಗೆ ಮನವಿಯೊಂದನ್ನು ಅರ್ಪಿಸಿದರು.

## ಮೈಸೂರಿನಲ್ಲಿ ಪ್ರದರ್ಶನ

ಮೈಸೂರು ದಲಿತಸಂಘರ್ಷ ಸಮಿತಿ ಶಾಖೆ ಮತ್ತು ಬಂಡಾಯ ಸಾಹಿತ್ಯ ಸಂಘಟನಾ ಶಾಖೆಯು ಜತೆಗೂಡಿ ಆಗಸ್ಟ್ 15ರಂದು 'ಕರಾಳ ದಿನ'ವನ್ನಾಗಿ ಆಚರಿಸಿದವು.

ಅಶೋಕಪುರಂನಿಂದ ಹೊರಟ ಮೆರವಣಿಗೆ ಅಶೋಕ ಸರ್ಕಲ್, ರಾಮಸ್ವಾಮಿ ಸರ್ಕಲ್ ಮಾರ್ಗವಾಗಿ ಸುಬ್ಬರಾಯನ ಕೆರೆ ಮೈದಾನದಲ್ಲಿ ಸಭೆ ನಡೆಸಿತು.

## ತುಮಕೂರಿನಲ್ಲಿ 'ಕಪ್ಪುದಿನ'

ದಲಿತ ಸಂಘರ್ಷ ಸಮಿತಿ ತುಮಕೂರು ಶಾಖೆಯು ವಿದ್ಯಾರ್ಥಿಗಳನ್ನು, ಯುವಕರು, ಕಾರ್ಮಿಕರು, ರೈತರು ಮಹಿಳೆಯರನ್ನು ಸಂಘಟಿಸಿ ಆಗಸ್ಟ್ 15 ರಂದು ಸ್ವಾತಂತ್ರ್ಯ ದಿನವನ್ನು ಬಹಿಷ್ಕರಿಸಿ ಕರಾಳ ದಿನವನ್ನಾಗಿ ಆಚರಿಸಿತು.

ಮೆರವಣಿಗೆಯಲ್ಲಿ ಸಹಸ್ರಾರು ದಲಿತರು ಬಾಯಿಗೆ ಬಟ್ಟೆಕಟ್ಟಿ ಕೈಗಳಲ್ಲಿ ಭಿತ್ತಿಪತ್ರ, ಕಪ್ಪು ಬಾವುಟಗಳನ್ನಿಡಿದು ಮೌನ ಮೆರವಣಿಗೆ ನಡೆಸಿದರು.

## ಚಿಕ್ಕಮಗಳೂರಿನಲ್ಲಿ 'ಕರಾಳ ದಿನ'

ಚಿಕ್ಕಮಗಳೂರು ಜಿಲ್ಲಾ ದಲಿತ ಸಂಘರ್ಷ ಸಮಿತಿ ಆಶ್ರಯದಲ್ಲಿ ಮೂಡಿಗೆರೆ, ತರೀಕೆರೆ, ಸಂತವೇರಿ ಶಾಖೆಯ ಕಾರ್ಯಕರ್ತರು ಒಟ್ಟಿಗೆ ಭಾಗವಹಿಸಿ ಆಗಸ್ಟ್ 15ರಂದು 'ಕಪ್ಪುದಿನ'ವನ್ನಾಗಿ ಆಚರಿಸಿದವು.

ಕಪ್ಪುಬಾವುಟ, ಭಿತ್ತಿ ಪತ್ರಗಳೊಡನೆ ನಡೆದ ಮೆರವಣಿಗೆ ಕೊನೆಯಲ್ಲಿ ಆಜಾದ್ ಮೈದಾನದಲ್ಲಿ ಸಭೆ ಸೇರಿತು. ದಲಿತರ ಬದುಕನ್ನು ಹೇಳುವ ಮತ್ತು ಕ್ರಾಂತಿಕಾರಿ ಹಾಡುಗಳೊಂದಿಗೆ ಸಭೆ ನಡೆಯಿತು.

ರಾಜ್ಯದಲಿತ ಸಂಘರ್ಷ ಸಮಿತಿ ಮತ್ತು ಬಂಡಾಯ ಸಾಹಿತ್ಯ ಸಂಘಟನಾ ಸಮಿತಿ ನೀಡಿದ ಕರೆ ಅನುಸರಿಸಿ ಭದ್ರಾವತಿ, ಶಿವಮೊಗ್ಗ, ಧಾರವಾಡ, ಗುಲ್ಬರ್ಗಾ, ರಾಯಚೂರು, ತಿಪಟೂರು, ಹುಣಸೂರು ಮುಂತಾದ ಕಡೆಗಳಲ್ಲಿ ಆಗಸ್ಟ್ 15ರಂದು ಜಿಲ್ಲಾ ದ.ಸಂ.ಸ. ಶಾಖೆಗಳು ಬಂಡಾಯ ಸಮಿತಿ ಶಾಖೆಗಳೊಡನೆ ಜತೆಗೂಡಿ 'ಕರಾಳದಿನ' ಆಚರಿಸಿದ ವರದಿ ಬಂದಿವೆ.

## ಸಮುದಾಯ ಜಾತಾ

ಸಮುದಾಯ ನಾಟಕ ತಂಡವು ಅಕ್ಟೋಬರ್ 15ರಿಂದ ನವೆಂಬರ್ 15ರವರೆಗೆ ರಾಜ್ಯದ ಪ್ರಮುಖ ಕೇಂದ್ರಗಳಲ್ಲಿ ಸಾಂಸ್ಕೃತಿಕ ಜಾತಾ ನಡೆಸಲಿದೆ.

ರಾಜ್ಯದ ಒಂದು ಮೂಲೆಯಿಂದ ಮತ್ತೊಂದು ಮೂಲೆಗೆ ಒಂದು ತಿಂಗಳ ಕಾಲ ಜಾತಾ. ಕಾಲ್ನಡಿಗೆಯಲ್ಲಿ ತೆರಳುವ ನೂರಾರು ಕಲಾವಿದರು, ಲೇಖಕರು ಹಾಗೂ ಸಾಮಾಜಿಕ, ಸಾಂಸ್ಕೃತಿಕ ಕಾರ್ಯಕರ್ತರು ಹಳ್ಳಿಹಳ್ಳಿಗಳಲ್ಲಿ ಸಾಂಸ್ಕೃತಿಕ ಜಾಗೃತಿ ಉಂಟುಮಾಡಲು ನಾಟಕಗಳನ್ನಾಡುವರು.

ಜಾತಾ ಸಂಘಟಿಸುತ್ತಿರುವುದು ಸಮುದಾಯವಾದರೂ ಜಾತಾದಲ್ಲಿ ಎಲ್ಲಾ ಪ್ರಗತಿಪರರು ಪಾಲ್ಗೊಳ್ಳಲು ಅವಕಾಶವಿದೆ.

ಏಕಕಾಲದಲ್ಲಿ ರಾಜ್ಯದ ಉತ್ತರ ಮತ್ತು ದಕ್ಷಿಣದ ತುದಿಯಿಂದ ಹೊರಡುವ ಎರಡು ಜಾತಾಗಳು ಕೊನೆಯಲ್ಲಿ ಧಾರವಾಡದಲ್ಲಿ ಸೇರಿ ಅಲ್ಲಿಂದ ಚದರುವವು.

ಕೋಲಾರದಿಂದ ಹೊರಡುವ ಒಂದು ಜಾತಾ ಕೋಲಾರ ಜಿಲ್ಲೆ, ಬೆಂಗಳೂರು ಜಿಲ್ಲೆ, ದಕ್ಷಿಣ ಕನ್ನಡ ಜಿಲ್ಲೆ, ಶಿವಮೊಗ್ಗ ಜಿಲ್ಲೆ, ಪೂರೈಸಿ ಉತ್ತರ ಕನ್ನಡ ಜಿಲ್ಲೆಯ ಮೂಲಕ ಧಾರವಾಡವನ್ನು ತಲುಪುವುದು.

ಬಿದರೆಯಿಂದ ಹೊರಡುವ ಮತ್ತೊಂದು ಜಾತಾ, ಬಿದರೆ ಜಿಲ್ಲೆ, ಗುಲ್ಬರ್ಗಾ ಜಿಲ್ಲೆ, ರಾಯಚೂರು ಜಿಲ್ಲೆ ಮುಗಿಸಿ ಬಳ್ಳಾರಿ ಜಿಲ್ಲೆ ಮೂಲಕ ಧಾರವಾಡ ಸೇರಲಿದೆ.

ದಲಿತರಿಗೆ ಸಂಬಂಧಿಸಿದ 'ಬೆಲ್ಚಿ', 'ಪಂಚಮ' 'ಪತ್ರೆಸಂಗಪ್ಪ' ಮುಂತಾದ ನಾಟಕಗಳನ್ನು ಪ್ರದರ್ಶಿಸಲು ಉದ್ದೇಶಿಸಲಾಗಿದೆ.

* * *

ಜಾತಿ ಒಂದು ದೇಶವನ್ನು ವಿಚಾರಗೊಂಡ ಬೌದ್ಧಿಕ ಶೂನ್ಯವನ್ನಾಗಿ ಮಾಡಿರುವುದಕ್ಕೆ ಭಾರತವೇ ಉದಾಹರಣೆ.

—ಲೋಹಿಯ

# ಕವಿತೆ

ಬಡಾವಣೆಯ ಮೇಲೆ ಚಲ್ಲಿದ ದುಷ್ಕಾಳಗ್ರಸ್ತರ ಪ್ರಚಂಡ ಬೀಡು
ಊರ ಪೌಳಿಯಾಚೆಯ ತಮ್ಮ ಮುಖ ತೋರುವವರಿಗೆ
ಹೇಗೆ ತೋರಿಸಿ ಕೊಡಲಿ ಅವರಿಗೆ ನಾನು
ಅವರ ಮತ್ತು ನನ್ನ ರಕ್ತದ ನಂಟು
ಎಲ್ಲಿ ಹೇಗೆ ಅಲೆದಾಡಲಿ ಅವರಿಗಾಗಿ
ಲೋಕಕ್ಕಾಗಿ ಕಾಯುವ ನನ್ನ ಪಟ್ಟಣದ ಕಾಲುಗಳಿಗೆ
ಈ ಚೀಂ ಪೀಂ ಗುಡುವ ಜೀವ; 'ಸುಜಲಾಮ್ ಸುಫಲಾಮ್-ವಂದೇ
ಮಾತರಮ್'

ಹೇಗೆ ಎಷ್ಟೊಂದು ಜನರ ನನ್ನ ಕೈಯಲಿ ತುಂಬಲಿ.
ನಾನವರಿಗೆ ಹೇಗೆ ಏನೆಂದು ಹೇಳಲಿ.

ನಾನು ಇಷ್ಟು ಮಾತ್ರ ಹೇಳುವೆನವರಿಗೀಗ
'ಇಂಡಿಯಾ ದಟ್ ಈಜ್ ಭಾರತ' ಎನ್ನುವ
ಮಧ್ಯಯುಗದ ಮಹಾಭ್ಯಾಗ್ಯವಂತರಿಗೀಗ
ಒಂದು ಬೆರಳು ಆಕಾಶದೆಡೆಗೆ ತೋರುವವರ
ಇನ್ನೊಂದು ತುಪ್ಪದಲಿ ಅದ್ದಿಡುವವರ
ರಾಜಗದ್ದುಗೆಯ ಪೊರೆವ ಸಾಮಂತ ಶಾಹಿಗಳಿಗೆ
ನಾನು ಇಷ್ಟು ಮಾತ್ರ ಹೇಳುವೆನವರಿಗೀಗ
ನೀರ ಹರಿವನ್ನು ತಮ್ಮ ಬಾಗಿಲಿನತ್ತ ತಿರುಗಿಸಿಕೊಂಡು
ಸಕ್ಕರೆಯಲಿ ಹೊರಳಾಡುವ ಮದಾಂಧರನು
ಅಪ್ಪಯ್ಯಗಳಿರಾ : ಹೃದಯದಲ್ಲಿ ಒತ್ತಿಟ್ಟ ಅಸಂಖ್ಯ ಬಾಂಬುಗಳು
ಸಿಡಿದು ಬೀಳುವವು ವೇಳೆ—ಅವೇಳೆಯಲಿ ನಿಮ್ಮ ಭೇಟಿಗಾಗಿ
ಯಾವ ಗಂಗಾಮಾತೆಯೂ ಉಳಿಯಲಾರಳು ನಿಮ್ಮ ರಕ್ಷಣೆಗಾಗಿ
ಅಪ್ಪಯ್ಯಗಳಿರಾ, ಅಮ್ಮಯ್ಯಗಳಿರಾ, ಹೃದಯದಲ್ಲಿ ಒತ್ತಿಟ್ಟ ಅಸಂಖ್ಯ ಬಾಂಬುಗಳು
ಸಿಡಿದು ಬೀಳುವವು ವೇಳೆ-ಅವೇಳೆಯಲಿ ನಿಮ್ಮ ಭೇಟಿಗಾಗಿ
ಹನಿ ನೀರಿಗಾಗಿ—ತುಣುಕು ರೊಟ್ಟಿಗಾಗಿ
ರಣರಣ ಅಲೆಯುವವರಿಗೆ ನೆಲಕೊಡಿಸುವುದಕ್ಕಾಗಿ

ಬಡಾವಣೆಯ ಮೇಲೆ ಚಲ್ಲಿದ ದುಷ್ಕಾಳಗ್ರಸ್ತರ ಪ್ರಚಂಡ ಬೀಡು
ನನ್ನ ಹೃದಯಲ್ಲಿ ಎಷ್ಟೊಂದು ಬಾಂಬುಗಳನು ಬಿತ್ತಿಡಲಿ
ಮತ್ತೆ ಹೀಗೆ ನೋಡುತ್ತ ಎಷ್ಟು ಕಾಲ ತೆಪ್ಪಗಿರಲಿ.

ಮರಾಠಿ ಮೂಲ :
● ಅರ್ಜುನ ಡಾಂಗಳೆ

ಕನ್ನಡಕ್ಕೆ :
● ಬಾಲಚಂದ್ರ ಜಯಶೆಟ್ಟಿ

ಕರ್ನಾಟಕ ಸರ್ಕಾರ

ವಾರ್ತಾ ಮತ್ತು ಪ್ರಚಾರ ಇಲಾಖೆ

# ಸಾಮಾಜಿಕ ನ್ಯಾಯದೆಡೆಗೆ ಕರ್ನಾಟಕದ ದೃಢ ಹೆಜ್ಜೆ

ಮುಕ್ಕೋಟಿ ಜನರ ಸರ್ವಾಂಗೀಣ ಅಭಿವೃದ್ಧಿಗಾಗಿ ಹಲವಾರು ಸಾಮಾಜಿಕ—ಆರ್ಥಿಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಮುಂದುವರಿಯುತ್ತಿರುವ ಕರ್ನಾಟಕ ಸರಕಾರ ಸ್ವಾತಂತ್ರ್ಯ ದಿನದಂದು ಸಮಾಜದ ದುರ್ಬಲ ವರ್ಗದವರ ಶ್ರೇಯೋಭಿವೃದ್ಧಿಗಾಗಿ ಶ್ರಮಿಸಲು ಮತ್ತೊಮ್ಮೆ ಪಣ ತೊಡುತ್ತದೆ.

ಸಾಮಾಜಿಕ ನ್ಯಾಯವನ್ನು ಸಕಲರಿಗೂ ದೊರಕಿಸುವಂತಹ ಮಹಾಯತ್ನದಲ್ಲಿ ಹಲವಾರು—ಭೂ ಸುಧಾರಣೆ, ಋಣ ಪರಿಹಾರ ಕಾಯಿದೆ, ಕಸಬುದಾರರಿಗೆ ಸುಲಭ ಬಡ್ಡಿ ದರದಲ್ಲಿ ಸಾಲನೀಡಿಕೆ, ಬಡವರಿಗೆ ಗೃಹ ನಿವೇಶನ, ಜನತಾ ಮನೆ, ವೃದ್ಧಾಪ್ಯ ವೇತನ, ಜೀತ ವಿಮೋಚನೆ, ಸಣ್ಣ ರೈತರು ಹಾಗೂ ಭೂ ರಹಿತ ಕೃಷಿ ಕಾರ್ಮಿಕರ ಅಭಿವೃದ್ಧಿಗಾಗಿ ನೆರವು, ಉದ್ಯೋಗ ಭರವಸೆ ಯೋಜನೆ, ಹರಿಜನ ಗಿರಿಜನ ಹಾಗೂ ಇನ್ನಿತರ ಹಿಂದುಳಿದ ವರ್ಗದವರ ಏಳಿಗೆಗಾಗಿ ಕಾರ್ಯಕ್ರಮಗಳು.

ಗ್ರಾಮಾಂತರ ಪ್ರದೇಶದಲ್ಲಿನ ಬಡ ಜನರಿಗೆ ಸುಗ್ಗಿಯ ನಂತರದ ಬಿಡುವಿನ ಕಾಲದಲ್ಲಿ ವರ್ಷದಲ್ಲಿ 100 ದಿನಗಳ ಖಾತರಿಯಾದ ಉದ್ಯೋಗ ನೀಡುವ ಯೋಜನೆಯನ್ನು ರಾಜ್ಯ ಸರಕಾರ ಮಾರ್ಚಿ 1 1979ರಿಂದ ಕಾರ್ಯಗತ ಮಾಡಿದೆ. ಈಗಾಗಲೇ 45 ತಾಲೂಕುಗಳಲ್ಲಿ ಕಾರ್ಯಗತಗೊಳ್ಳುತ್ತಿರುವ ಈ ಯೋಜನೆಯನ್ನು ರಾಜ್ಯದ ಉಳಿದ ತಾಲೂಕುಗಳಿಗೂ ವಿಸ್ತರಿಸಲಾಗುವುದು.
ಆರ್ಥಿಕವಾಗಿ ಹಿಂದುಳಿದ ಕುಟುಂಬಗಳ ಅಭ್ಯರ್ಥಿಗಳಿಗೆ ಸರಕಾರಿ ಸೇವೆಗಳಲ್ಲಿ ಕಾಯ್ದಿರಿಸಲಾದ ಹುದ್ದೆಗಳ ಸಂಖ್ಯೆಯನ್ನು ಶೇಕಡಾ 15ಕ್ಕೆ ಏರಿಸಲಾಗಿದೆ. ಹರಿಜನ ಗಿರಿಜನ ಮತ್ತಿತರ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಈಗಾಗಲೇ ಕಾಯ್ದಿರಿಸಲಾದ ಶೇಕಡಾ 51ರ ಜೊತೆಗೆ ಈ ಮೀಸಲಾತಿಯನ್ನು ಮಾಡಲಾಗಿದೆ.

ರಾಜ್ಯದ ಒಂದು ಮೂಲೆಯಿಂದ ಮತ್ತೊಂದೆಡೆಗೆ ಸರಕುಗಳ ಸುಗಮ ಸಾಗಾಣಿಕೆಗಾಗಿ ಆಕ್ಟ್ರಾಯಿ ತೆರಿಗೆ ರದ್ದತಿ.

ಅಂತರ ರಾಷ್ಟ್ರೀಯ ಮಕ್ಕಳ ವರ್ಷದ ಅಂಗವಾಗಿ ರಾಜ್ಯ ಸರಕಾರದ ವತಿಯಿಂದ ಮಕ್ಕಳಿಗಾಗಿ ವಿಶೇಷ ಆರೋಗ್ಯ ಕಾರ್ಯಕ್ರಮ. ರಾಜ್ಯದ 27 ಲಕ್ಷ ಮಕ್ಕಳಿಗೆ ಮಧ್ಯಾಹ್ನದ ಉಪಹಾರ ಹಾಗೂ ವಿಶೇಷ ಪೌಷ್ಟಿಕ ಆಹಾರ ಯೋಜನೆಗಳು.

"ಭಾಗ್ಯ ಜ್ಯೋತಿ" ಯೋಜನೆಯನ್ವಯ ಗ್ರಾಮೀಣ ಪ್ರದೇಶದ ತೀರ ಬಡ ಕುಟುಂಬಗಳ ಮನೆಗಳಿಗೆ ವಿದ್ಯುಚ್ಛಕ್ತಿ ಸೌಲಭ್ಯ. ಈ ವರ್ಷದಲ್ಲಿ ಒಂದು ಕೋಟಿ ರೂ. ವೆಚ್ಚದಲ್ಲಿ ಸುಮಾರು 40 ಸಾವಿರ ಇಂಥ ಕುಟುಂಬಗಳಿಗೆ ಈ ಯೋಜನೆಯ ಪ್ರಯೋಜನ.

ವರ್ಷಕ್ಕೆ ರೂ. 3600 ಕ್ಕಿಂತ ಕಡಿಮೆ ವರಮಾನವಿರುವ ಕುಟುಂಬಗಳ ಮಕ್ಕಳಿಗೆ ಅವರು ಯಾವುದೇ ಕೋಮಿಗೆ ಸೇರಿದ್ದರೂ, ವ್ಯಾಸಂಗ ಮತ್ತು ಪ್ರಯೋಗಶಾಲೆ ಶುಲ್ಕಗಳ ವಿನಾಯಿತಿ. ಈ ಸೌಲಭ್ಯದಿಂದ ಶಿಕ್ಷಣ ಸಂಸ್ಥೆಗಳಿಗೆ ಉಂಟಾಗುವ ನಷ್ಟವನ್ನು ಭರಿಸಲು ರಾಜ್ಯ ಸರಕಾರ ಈ ವರ್ಷ 12 ಕೋಟಿ ರೂ. ಗಳನ್ನು ನೀಡಿದೆ. ಕೈಗಾರಿಕಾ ಕ್ಷೇತ್ರದಲ್ಲಿ ರಾಜ್ಯದ ಸಾಧನೆ ಅಪಾರ. ರಾಷ್ಟ್ರದ ಔದ್ಯೋಗಿಕ ಸರಾಸರಿ ವಾರ್ಷಿಕ ಬೆಳವಣಿಗೆ ಶೇಕಡಾ 6ರಷ್ಟಿದ್ದರೆ ಈ ಕ್ಷೇತ್ರದಲ್ಲಿ ಕರ್ನಾಟಕದ ಪ್ರಗತಿ ಶೇಕಡಾ 14.8.

ರೂ. 229 ಕೋಟಿಯ ಬೃಹತ್ ಕಾಳಿ ಯೋಜನೆಯ ಪ್ರಥಮ ಹಂತ ಇನ್ನೇನು ಕಾರ್ಯಾರಂಭ ಮಾಡಲಿದೆ. ಪ್ರಥಮ ಹಂತದಿಂದ ರಾಜ್ಯಕ್ಕೆ 910 ಮೆಗಾವಾಟ್ ವಿದ್ಯುತ್ ದೊರೆಯಲಿದೆ.

ಮ. 21-8-79

ಕರ್ನಾಟಕ ಸರ್ಕಾರದ
ವಾರ್ತಾ ಮತ್ತು ಪ್ರಚಾರ ಇಲಾಖೆಯ ಪ್ರಕಟಣೆ

No. DIP/CPB/1208/79-80

KRNB 364 Panchama Fortnightly 5, September 79 Regd. No. 29681/76

# ದಲಿತರಿಗೆ ಬಿಡುಗಡೆ ಎಂದು? ಹೇಗೆ?

ಅನೇಕ ರೀತಿಯ ಅನ್ಯಾಯಗಳಿಗೆ ಒಳಗಾಗಿರುವ ದಲಿತರಿಗೆ ಬಿಡುಗಡೆಯೇ ಇಲ್ಲವೆ? ಈ ಪ್ರಶ್ನೆ ಇಂಡಿಯಾ ದೇಶದ ಉದ್ದಗಲಕ್ಕೂ ಮನುಷ್ಯತ್ವ ಇರುವ ಜನರನ್ನು ಆವರಿಸಿದೆ. ಇದು ಅತ್ಯಂತ ಮುಖ್ಯವಾದ ಪ್ರಶ್ನೆ. ಈ ಬಗೆಬಗೆಯ ವಂಚನೆಗಳಲ್ಲಿ ಆರ್ಥಿಕ ಮತ್ತು ಸಾಮಾಜಿಕ ಅಸಮಾನತೆಗಳು ಎದ್ದು ಕಾಣುತ್ತವೆ. ದಲಿತನ ಎರಡು ಕೈಗಳನ್ನೂ ಬಿಗಿದಿರುವ ಈ ಎರಡು ಬೇಡಿಗಳು ಪುಡಿಯಾಗಲು ಸಾಧ್ಯವೇ ಇಲ್ಲ ಎಂದು ಕೆಲವರು ಹೇಳುತ್ತಾರೆ. ಮನುಷ್ಯರಲ್ಲಿರುವ ಅಸಮಾನತೆ ಸಹಜವಾದುದು. ಅದನ್ನು ಸರಿಪಡಿಸಲು ಯಾರಿಗೂ ಸಾಧ್ಯವಿಲ್ಲ ಎಂದು ಇವರ ಪ್ರಚಾರ. ಉದಾಹರಣೆಗೆ ಬಡವ ಶ್ರೀಮಂತ ಎಂಬ ಅಸಮಾನತೆ. ಒಬ್ಬನು ಬಡವನಾಗಿರುವುದು ಅವನ ಮೂರ್ಖತನದಿಂದ ಎಂದೂ ಒಬ್ಬನು ಶ್ರೀಮಂತನಾಗಿರುವುದು ಅವನ ಬುದ್ಧಿವಂತಿಕೆಯಿಂದ ಎಂದೂ ಇವರು ವಾದಿಸುತ್ತಾರೆ. ಶ್ರೀಮಂತರನ್ನು ಕಂಡರೆ ಕೋಪಗೊಳ್ಳಲು ಕಾರಣವೇನು? ತಾವು ಶ್ರೀಮಂತರಾಗಲಿಲ್ಲವಲ್ಲಾ

ಸಿದ್ದಲಿಂಗಯ್ಯ

ಎಂಬ ಕೊರಗೇ ಇದಕ್ಕೆ ಕಾರಣವೆಂದು ಇವರು ಸಂಶೋಧನೆ ಮಾಡಿದ್ದಾರೆ. ಹೀಗೆ ಹೇಳುವವರದೇ ಒಂದು ಸಿದ್ಧಾಂತವಿದೆ. ಈ ಗುಂಪಿನಲ್ಲೇ ಇನ್ನೂ ಕೆಲವರು ಬಡವರು ಶ್ರೀಮಂತರ ವಿರುದ್ಧ ಕೋಪಗೊಳ್ಳಲು ಸರಿಯಾದ ಕಾರಣಗಳೇ ಇಲ್ಲವೆಂದೂ, ಶ್ರೀಮಂತರು ಕನಿಕರದಿಂದ ಬಡವರಿಗೆ ಸಹಾಯ ಮಾಡುತ್ತಾರೆಂದೂ ನಂಬಿದ್ದಾರೆ. ಇದನ್ನು ತಿಳಿಯದೆ ಬಡವರು ಕೂಗಾಡಿದರೆ ಬರುವ ಅಲ್ಪವನ್ನೂ ಕಳೆದುಕೊಳ್ಳಬೇಕಾಗುತ್ತದೆ ಎಂದು ಹೆದರಿಸುತ್ತಾರೆ,

ಒಬ್ಬ ಸಾಹುಕಾರನು ಒಬ್ಬ ಬಡವನನ್ನು ಬಾರುಗೋಲಿನಿಂದ ಹೊಡೆಯುವುದು ಸರಿ. ಅಷ್ಟೇ ಅಲ್ಲ ಒಬ್ಬ ಮಾಲೀಕನು ಹತ್ತಾರು ಜನ ಕಾರ್ಮಿಕರನ್ನು ಶೋಷಣೆ ಮಾಡುವುದೂ ಸರಿ ಎಂದು ವಾದಿಸುವವರೂ ಇದ್ದಾರೆ. ಒಂದು ಕಾಡಿನಲ್ಲಿ ಬಲವಾದ ಪ್ರಾಣಿಯು ವೀಕಾದ ಪ್ರಾಣಿಯನ್ನು ತಿಂದೇ ಬದುಕಬೇಕು. ಅದಕ್ಕೆ ಬೇರೆ ದಾರಿಯೇ ಇಲ್ಲ. ಹಾಗೆಯೇ ಒಬ್ಬ ಶ್ರೀಮಂತ ಬೆಳೆಯಬೇಕಾದರೆ ಹತ್ತಾರು ಬಡವರ ಸಂಸಾರಗಳು ಅಳಿಯಬೇಕು. ಬೇರೆ ದಾರಿಯೇ ಇಲ್ಲ ಎಂದು ನಂಬಿರುವ ಇವರು ಅರಣ್ಯ ನ್ಯಾಯವನ್ನು ಊರಿನಲ್ಲೂ ಜಾರಿಮಾಡಲು ಪ್ರಯತ್ನಿಸುತ್ತಿದ್ದಾರೆ.

ಈ ಪೈಕಿಯ ಜನರು ಭಗವಂತನೇ ತಮ್ಮ ಬದುಕಿನ ಎಲ್ಲ ಆಗುಹೋಗುಗಳಿಗೂ ಕಾರಣಕರ್ತ ಎಂದು ನಂಬುತ್ತಾರೆ (ಉಚ್ಚೆ ಹುಯ್ಯುವುದೂ, ಎರಡಕ್ಕೆ ಹೋಗುವುದೂ ದೇವರ ಇಚ್ಛೆಗೆ ಅನುಗುಣವಾಗಿ) ಆದ್ದರಿಂದ ದಲಿತರುಭಕ್ತಿಯನ್ನುಬೆಳೆಸಿಕೊಳ್ಳಬೇಕು ಮೇಲುಜಾತಿಯವರಂತೆ ತಾವೂ ವರ್ತಿಸುವುದನ್ನು ಕಲಿತುಕೊಳ್ಳಬೇಕು ಎಂದು ಬೋಧನೆಮಾಡುತ್ತಾರೆ. ಈ ರೀತಿ ಆದರೆ ಮಾತ್ರ ದಲಿತರನ್ನು ಹತ್ತಿರ ಸೇರಿಸುತ್ತೇವೆ ಎಂದು ಹೇಳುತ್ತಾರೆ. ಹೆಂಡ ಕುಡಿಯುವುದನ್ನು ಬಿಡಬೇಕು ಎಂದು ಮೊರಾರಜಿ ದೇಸಾಯಿ ಅವರು ಹೇಳುತ್ತಿದ್ದರು. ಬೀಡಿ ಸೇದುವುದನ್ನು ಬಿಡಬೇಕು ಎಂದು ರಾಜನಾರಾಯಣ ಅವರು ಹೇಳಿದರು. ಮಾಂಸಮಡ್ಡಿ ಮುಟ್ಟಬಾರದು ಎಂದು ಗಾಂಧಿಯವರಿಂದ ಹಿಡಿದು ಎಲ್ಲರೂ ಹೇಳುತ್ತಿದ್ದಾರೆ. ಹಾಗಾದರೆ ದಲಿತರು ಏನನ್ನು ತಿನ್ನಬೇಕು, ಏನನ್ನು ಕುಡಿಯಬೇಕು ಎಂದು ಖಚಿತವಾಗಿ ಯಾರೂ ಹೇಳಿದಂತೆ ನನಗೆ ನೆನಪಿಲ್ಲ. ಇವರ ಪ್ರಕಾರ ದಲಿತರ ಬಿಡುಗಡೆ ಹೆಂಡ ಬಾಡು ಬೀಡಿಯನ್ನ ಬಿಟ್ಟರೆ ಮಾತ್ರ ಎಂದು ಆಯಿತು. ದಲಿತರ ಬಡತನಕ್ಕೆ ಕಾರಣ ಅವರ ಕುಡಿತ ಎಂದು ಇವರ ಘೋಷಣೆ. ಹಾಗಾದರೆ ದಲಿತರು ಕುಡಿಯುವುದು ತಿನ್ನುವುದನ್ನು ಬಿಟ್ಟರೆ ಕೂಡಲೇ ಉದ್ಧಾರವಾಗುತ್ತಾರೋ? ಈ ಪ್ರಶ್ನೆಗೆ ನನ್ನ ಉತ್ತರ: ಖಂಡಿತವಾಗಲೂ ಉದ್ಧಾರಗುವುದಿಲ್ಲ. ಯಾಕೆ? ಯಾಕೆಂದರೆ ಬಹಳ ಜನ ವಿದ್ಯಾವಂತ ಮತ್ತು ಅರೆವಿದ್ಯಾವಂತ ದಲಿತರು ಗಾಂಧಿ ಮುಂತಾದವರ ಮಾತಿಗೆ ಮರುಳಾಗಿ ಹೆಂಡಬಾಡು ಬಿಟ್ಟರು. ತಲೆಗೆ ಗಾಂಧಿ ಟೋಪಿ ಇಟ್ಟರು. ಆದರೆ ಅವರು ಬಡವರಾಗಿಯೇ ಉಳಿದರು. ಈತ ಹೊಲೆಮಾದಿಗನಾದರೂ ಹೆಂಡಬಾಡು ಮುಟ್ಟುವುದಿಲ್ಲ ಎಂದು ಯಾವ ಮೇಲು ಜಾತಿಯವರೂ ಇವರಿಗೆ ಮನೆಗೆ ಕರೆದು ಊಟ ಹಾಕಲಿಲ್ಲ. ಹೆಣ್ಣುಗಂಡು ಕೊಡುವ ತೆಗೆದುಕೊಂಡು ಹೋಗುವ ಸಂಬಂಧ ಬೆಳೆಸಲಿಲ್ಲ.

[ಮುಂದುವರಿಯುವುದು]

## ಸರ್ಕಲ್ ಇನ್ಸ್‌ಪೆಕ್ಟರ್ ಲುಚ್ಚಾ ಹೈ

ಚಿಂತಾಮಣಿಯಲ್ಲಿ ಈ ಹಿಂದೆ ದಲಿತರ ಮೇಲೆ ನಡೆದ ದೌರ್ಜನ್ಯದ ಪ್ರಕರಣದ ಬಗ್ಗೆ ಪೊಲೀಸ್ ಠಾಣೆಗೆ ವಿಚಾರಿಸಲು ಹೋದ ಸ್ಥಳೀಯ ದಲಿತ ಸಂಘರ್ಷ ಸಮಿತಿ ಕಾರ್ಯಕರ್ತರೊಡನೆ ಅನುಚಿತವಾಗಿ ವರ್ತಿಸಿದ ಸರ್ಕಲ್ ಇನ್ಸ್‌ಪೆಕ್ಟರ್‌ನ ಪ್ರತಿಕೃತಿಯೊಂದನ್ನು ಇತ್ತೀಚೆಗೆ ಕೋಲಾರ ಮತ್ತು ಮುಳಬಾಗಿಲುನಲ್ಲಿ ಸುಡಲಾಯಿತು.

ಕೋಲಾರದಲ್ಲಿ ನಡೆದ ಪ್ರತಿಭಟನಾ ಮೆರವಣಿಗೆಯಲ್ಲಿ "ದಲಿತರ ಮೇಲಿನ ಪೊಲೀಸರ ದೌರ್ಜನ್ಯಕ್ಕೆ ಧಿಕ್ಕಾರ", "ರಿಕ್ಷಾವಾಲ ಅಚ್ಚಾ ಹೈ, ಸರ್ಕಲ್ ಇನ್ಸ್‌ಪೆಕ್ಟರ್ ಲುಚ್ಚಾ ಹೈ" ಮುಂತಾದ ಘೋಷಣೆಗಳೊಂದಿಗೆ ಆತನ ಅಸಭ್ಯ ವರ್ತನೆಯನ್ನು ಖಂಡಿಸಲಾಯಿತು.

## ಇಂಡಿಯಾದಲ್ಲಿ ಏನೇನ ಕಂಡೆ?

ಇಂಡಿಯಾದಲ್ಲಿ ಏನೇನ ಕಂಡೆ? ದಲಿತರ ಜೀವಂತ ಸುಡುವುದ ಕಂಡೆ! ದಲಿತರನ್ನು ಸುಟ್ಟ ಬೆಂಕಿ ದೇಶವನ್ನು ಸುಡುತ್ತದೆ. ದಲಿತರ ನಾಲಿಗೆಯಲ್ಲಿ ಇಂಡಿಯಾ ಸತ್ತಿದೆ. ಹಸಿವು-ಅಸ್ಪೃಶ್ಯತೆ ಇಲ್ಲದ ಸ್ವಾತಂತ್ರ್ಯ ನಮಗೆ ಬೇಕು, ಜಾತಿವಾದಿ ತಾಯ್ಗಂಡರಿಗೆ ಧಿಕ್ಕಾರ, ಅನ್ನ, ವಸತಿ, ವಿದ್ಯೆ ಕೊಡದ ಸ್ವಾತಂತ್ರ್ಯ ನಮಗೆ ಬೇಡ, ಅಸಮಾನತ ತೊಲಗಲಿ, ಭೂಹೀನರಿಗೆ ಭೂಮಿ ಹಂಚಿಕೆಯಾಗಲಿ, ದಲಿತರ ಮೇಲಿನ ದೌರ್ಜನ್ಯ ನಿಲ್ಲಲಿ. ಹರಿಜನ ಮಂತ್ರಿ, ಶಾಸಕರು ದಲಿತರ ಓಟಿನ ಏಜೆಂಟರು. ಆರ್ಥಿಕ-ಸಾಮಾಜಿಕ ಬದಲಾವಣೆಗಾಗಿ ನಮ್ಮ ಹೋರಾಟ—

ಸಮಗ್ರ ಬದಲಾವಣೆಗಾಗಿ ನಮ್ಮ ಹೋರಾಟ, ದಲಿತ ಕ್ರಾಂತಿ ಚಿರಾಯುವಾಗಲಿ.

ಆಗಸ್ಟ 15ರ ಸ್ವಾತಂತ್ರ್ಯ ದಿನಾಚರಣೆಯನ್ನು ಪ್ರತಿಭಟಿಸಿ 'ಕರಾಳದಿನ' ಮತ್ತು 'ಶೋಷಣಾ ವಿರೋಧಿ' ದಿನವೆಂದು ಆಚರಿಸಲು ರಾಜ್ಯ ದಲಿತ ಸಂಘರ್ಷ ಸಮಿತಿ ಮತ್ತು ಬಂಡಾಯ ಸಾಹಿತ್ಯ ಸಂಘಟನಾ ಸಮಿತಿ ತಮ್ಮ ಶಾಖೆಗಳಿಗೆ ನೀಡಿದ್ದ ಕರೆ ಮೇರೆಗೆ ಆಯಾ ಊರುಗಳಲ್ಲಿ ಮೇಲ್ಕಂಡ ಸಮಿತಿಗಳ ಕಾರ್ಯಕರ್ತರು ಬರೆದಿರುವ ಗೋಡೆ ಬರಹಗಳು ಇವು.



ಈ ಪತ್ರಿಕೆಯು ರಾಮದೇವ ರಾಕೆ ಅವರ ಸಂಪಾದಕತ್ವದಲ್ಲಿ, ನೂತನ್ ಪ್ರಿಂಟಿಂಗ್ ಪ್ರೆಸ್, ಬೆಂಗಳೂರು-3 ಇಲ್ಲಿ ಮುದ್ರಿಸಲ್ಪಟ್ಟು ಗೋವಿಂದಯ್ಯ ಅವರಿಂದ ಪ್ರಕಟಿಸಲ್ಪಟ್ಟಿತು. ವಿಳಾಸ: 5ಎ ವಾಣಿ ವಾಣಿಜ್ಯಶಾಲಾ, ಪತ್ರಕರ್ತರ ಕಾಲೋನಿ. ಬೆಂಗಳೂರು-560002.